<u>ಕರ್ನಾಟಕ ವಿಧಾನ ಪರಿಷತ್ತು</u>

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 373
ಸದಸ್ಯರ ಹೆಸರು : ಶ್ರೀ ಗೋವಿಂದರಾಜು (ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖಾ ಸಚಿವರು
ಉತ್ತರಿಸುವ ದಿನಾಂಕ : 11.12.2020

<table>
<tr><th rowspan="2">ಕ್ರ. ಸಂ</th><th rowspan="2">ಪ್ರಶ್ನೆ</th><th colspan="2">ಉತ್ತರ</th></tr>
<tr><th>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ</th><th>ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ</th></tr>
<tr><td>ಅ)</td><td>ಕೋಲಾರ ಜಿಲ್ಲೆಯ ಮಹಿಳಾ ಮತ್ತು ಮಕ್ಕಳ ಕಲ್ಯಾಣ, ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖೆಗೆ ಮಂಜೂರಾಗಿರುವ ಒಟ್ಟು ಹುದ್ದೆಗಳ ಸಂಖ್ಯೆ ಎಷ್ಟು; (ಇಲಾಖಾವಾರು ಮತ್ತು ವೃಂದಗಳವಾರು ವಿವರಗಳನ್ನು ನೀಡುವುದು)</td><td rowspan="2">ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ಕೋಲಾರ ಜಿಲ್ಲೆಯಲ್ಲಿ ವಿವಿಧ ವೃಂದಗಳಿಗೆ ಮಂಜೂರಾಗಿರುವ ಭರ್ತಿ ಮತ್ತು ಖಾಲಿ ಇರುವ ಹುದ್ದೆಗಳ ವಿವರವನ್ನು ಅನುಬಂಧ-1ರಲ್ಲಿ ಒದಗಿಸಿದೆ.</td><td>ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯಡಿ ಕೋಲಾರ ಜಿಲ್ಲೆಯ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳ ಕಛೇರಿಗೆ ಒಟ್ಟು 04 ಹುದ್ದೆಗಳು ಮಂಜೂರಾಗಿದ್ದು, ವಿವರ ಕೆಳಕಂಡಂತಿದೆ.
<table>
<tr><th>ಕ್ರ. ಸಂ</th><th>ವೃಂದ</th><th>ಹುದ್ದೆಯ ಪದನಾಮ</th><th>ಮಂಜೂರಾದ ಸಂಖ್ಯೆ</th></tr>
<tr><td>1</td><td>ಬಿ</td><td>ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿ</td><td>01</td></tr>
<tr><td>2</td><td>ಸಿ</td><td>ಯೋಜನಾ ಸಹಾಯಕರು</td><td>01</td></tr>
<tr><td>3</td><td>ಸಿ</td><td>ಬೆರಳಚ್ಚುಗಾರರು</td><td>01</td></tr>
<tr><td>4</td><td>ಡಿ</td><td>ಗ್ರೂಪ್-ಡಿ</td><td>01</td></tr>
</table></td></tr>
<tr><td>ಆ)</td><td>ಇವುಗಳಲ್ಲಿ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಹುದ್ದೆಗಳು ಯಾವುವು ಮತ್ತು ಖಾಲಿ ಇರುವ ಹುದ್ದೆಗಳು ಯಾವುವು; (ಇಲಾಖಾವಾರು ಮತ್ತು ವೃಂದಗಳವಾರು ವಿವರಗಳನ್ನು ನೀಡುವುದು)</td><td><ul><li>ಕೋಲಾರ ಜಿಲ್ಲೆಯ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಪ್ರಸ್ತುತ ಗ್ರೂಪ್ ಬಿ ವೃಂದದ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳ ಹುದ್ದೆ ಮತ್ತು ಗ್ರೂಪ್ ಸಿ ವೃಂದದ ಯೋಜನಾ ಸಹಾಯಕರ ಹುದ್ದೆಗಳು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಅಧಿಕಾರಿ/ ಸಿಬ್ಬಂದಿಗಳ ಹೆಚ್ಚುವರಿ ಪ್ರಭಾರದಿಂದ ಭರ್ತಿಯಾಗಿರುತ್ತದೆ.</li><li>ಉಳಿದಂತಹ ಗ್ರೂಪ್ ಸಿ ವೃಂದದ ಬೆರಳಚ್ಚುಗಾರರು ಮತ್ತು ಗ್ರೂಪ್ ಡಿ ಹುದ್ದೆಗಳನ್ನು ಸಹ ನಿಯಮಾನುಸಾರ ಬಾಹ್ಯ ಮೂಲದಿಂದ ಭರ್ತಿ ಮಾಡಲಾಗಿರುತ್ತದೆ.</li></ul></td></tr>
<tr><td>ಇ)</td><td>ಈ ಹುದ್ದೆಗಳು ಎಷ್ಟು ವರ್ಷಗಳಿಂದ ಖಾಲಿ ಇವೆ; ಖಾಲಿ ಇರುವ ಹುದ್ದೆಗಳನ್ನು ತುಂಬಲು ಸರ್ಕಾರಕ್ಕಿರುವ ತೊಂದರೆಗಳೇನು;</td><td>2016-17ನೇ ಸಾಲಿನಿಂದ ಹುದ್ದೆಗಳು ಖಾಲಿ ಇರುತ್ತವೆ.</td><td><ul><li>ಕೋಲಾರ ಜಿಲ್ಲೆಯ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿನ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳ ಹುದ್ದೆಯು 2018 ರಿಂದ ಖಾಲಿ ಇರುತ್ತದೆ.</li><li>ಉಳಿದ ಯೋಜನಾ ಸಹಾಯಕರ 01 ಹುದ್ದೆ, ಬೆರಳಚ್ಚುಗಾರರ 01 ಹುದ್ದೆ ಮತ್ತು ಗ್ರೂಪ್-ಡಿ 01 ಹುದ್ದೆಗಳು ಸುಮಾರು 14 ವರ್ಷಗಳಿಂದ ಖಾಲಿ ಇರುತ್ತವೆ.</li></ul></td></tr>
</table>

| | | | |
|---|---|---|---|
| | | | • ಸದರಿ ಹುದ್ದೆಗಳನ್ನು ಭರ್ತಿ ಮಾಡಲು ಆರ್ಥಿಕ ಇಲಾಖೆಯ ಸಹಮತಿ ಅವಶ್ಯವಿದ್ದು, ಸಂಬಂಧಿತ ಪ್ರಕ್ರಿಯೆ ಜಾರಿಯಲ್ಲಿದೆ. |
| ಈ) | ಹುದ್ದೆಗಳು ಖಾಲಿ ಇರುವುದರಿಂದ ಸಾರ್ವಜನಿಕರ ಕೆಲಸ ಕಾರ್ಯಗಳಿಗೆ ತೊಂದರೆಯಾಗುತ್ತಿರುವುದು ನಿಜವೇ; | ಇಲಾಖೆಯು ಅನುಷ್ಠಾನ ಗೊಳಿಸುತ್ತಿರುವ ಯೋಜನೆಗಳು ಫಲಾನುಭವಿಗಳಿಗೆ ಸಕಾಲದಲ್ಲಿ ತಲುಪಲು ತೊಂದರೆಯಾಗದಂತೆ ಕೆಳಕಾಣಿಸಿದ ಕ್ರಮಗಳನ್ನು ತೆಗೆದುಕೊಳ್ಳಲಾಗಿರುತ್ತದೆ.<br>1. ಜಿಲ್ಲೆಯಲ್ಲಿ ಖಾಲಿ ಇರುವ ಗ್ರೂಪ್-ಎ, ಬಿ ಮತ್ತು ಸಿ ವೃಂದದ ಹುದ್ದೆಗಳಿಗೆ ಸಮಾನಾಂತರ ವೃಂದದಿಂದ ಹೆಚ್ಚುವರಿ ಪ್ರಭಾರ ವಹಿಸಲಾಗಿದೆ.<br>2. ಖಾಲಿ ಇರುವ ಬೆರಳಚ್ಚುಗಾರರು, ಯೋಜನಾವಾರು ಡಾಟಾ ಎಂಟ್ರಿ ಆಪರೇಟರ್‌ಗಳು, ಹಿರಿಯ ವಾಹನ ಚಾಲಕರು, ಚಾಲಕರು ಮತ್ತು ಗ್ರೂಪ್-ಡಿ ಹುದ್ದೆಗಳಿಗೆ ಹೊರಗುತ್ತಿಗೆ ಸೇವೆಯಿಂದ ಪಡೆಯಲಾಗಿದೆ.<br>3. ಮಾತೃ ವಂದನ ಯೋಜನೆಯ ಅನುಷ್ಠಾನಕ್ಕೆ ಜಿಲ್ಲಾ ಮಟ್ಟದಲ್ಲಿ ಓರ್ವ ಜಿಲ್ಲಾ ಕಾರ್ಯಕ್ರಮ ಸಂಯೋಜಕರು ಮತ್ತು ಜಿಲ್ಲಾ ಸಹಾಯಕರನ್ನು ಹಾಗೂ ಪೋಷಣ್ ಅಭಿಯಾನ ಯೋಜನೆಯ ಅನುಷ್ಠಾನಕ್ಕೆ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಂಯೋಜಕರು ಮತ್ತು ಜಿಲ್ಲಾ ಸಹಾಯಕರು ಮತ್ತು ಯೋಜನಾ ಕಛೇರಿಗಳಲ್ಲಿ ಓರ್ವ ಬ್ಲಾಕ್ ಸಂಯೋಜಕರು ಮತ್ತು ಓರ್ವ ಸಹಾಯಕರಂತೆ ಒಟ್ಟು 16 ಸಿಬ್ಬಂದಿಗಳನ್ನು ಗುತ್ತಿಗೆ ಆಧಾರದಲ್ಲಿ ನೇಮಿಸಿಕೊಂಡು ಮಾತೃ ವಂದನ ಹಾಗೂ ಪೋಷಣ್ ಅಭಿಯಾನ ಯೋಜನೆಗಳನ್ನು ಅನುಷ್ಠಾನ ಗೊಳಿಸಲಾಗುತ್ತಿದೆ. | ಕೋಲಾರ ಜಿಲ್ಲೆಯ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ 04 ಹುದ್ದೆಗಳಲ್ಲಿ ಪ್ರಸ್ತುತ 02 ಹುದ್ದೆಗಳು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಅಧಿಕಾರಿ/ಸಿಬ್ಬಂದಿಗಳಿಂದ ಮತ್ತು 02 ಹುದ್ದೆಗಳನ್ನು ಬಾಹ್ಯ ಮೂಲದಿಂದ ಭರ್ತಿ ಮಾಡಿರುವುದರಿಂದ ಸಾರ್ವಜನಿಕ ಕೆಲಸ ಕಾರ್ಯಗಳಿಗೆ ಯಾವುದೇ ತೊಂದರೆಗಳುಂಟಾಗಿರುವುದಿಲ್ಲ. |

| | | | |
|---|---|---|---|
| ಉ) | ಹಾಗಿದ್ದಲ್ಲಿ, ಖಾಲಿ ಇರುವ ಹುದ್ದೆಗಳನ್ನು ಯಾವ ಕಾಲಮಿತಿಯೊಳಗಾಗಿ ತುಂಬಲಾಗುವುದು; (ವಿವರಗಳನ್ನು ನೀಡುವುದು) | ಅನುಬಂಧ-2ರಲ್ಲಿ ಮಾಹಿತಿ ಒದಗಿಸಿದೆ. | ಆರ್ಥಿಕ ಇಲಾಖೆಯಿಂದ ಸಹಮತಿ ದೊರೆತ ನಂತರ ನಿಯಮಾನುಸಾರ ಭರ್ತಿ ಮಾಡಲು ಕ್ರಮವಹಿಸಲಾಗುವುದು. |
| ಊ) | ಕೋಲಾರ ಜಿಲ್ಲೆಯಲ್ಲಿರುವ ಮಹಿಳಾ ಮತ್ತು ಮಕ್ಕಳ ಕಲ್ಯಾಣ, ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖೆಯು ಕಾರ್ಯ ನಿರ್ವಹಿಸುತ್ತಿರುವ ಕಟ್ಟಡವು ತುಂಬ ದುಸ್ಥಿತಿಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸದರಿ ಕಟ್ಟಡವು ಮೂಲ ಆರೋಗ್ಯ ಇಲಾಖೆಗೆ ಸೇರಿದ ಸ್ವತ್ತಾಗಿದ್ದು, ಇಲಾಖೆಗೆ ಹಸ್ತಾಂತರಗೊಂಡಿರುವುದಿಲ್ಲ. ಈ ಕುರಿತು ಮಾನ್ಯ ಜಿಲ್ಲಾಧಿಕಾರಿಗಳು, ಮಾನ್ಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳಿಗೆ ಹಾಗೂ ಲೋಕೋಪಯೋಗಿ ಇಲಾಖೆಗೆ ದುರಸ್ಥಿ ಮಾಡಿಕೊಡಲು ಕೋರಿ ಪತ್ರ ವ್ಯವಹಾರ ಮಾಡಲಾಗಿದೆ. ಅಲ್ಲದೇ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಕಟ್ಟಡವನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ಹಸ್ತಾಂತರಿಸಲು ಕೋರಿ ಪತ್ರ ವ್ಯವಹಾರ ಮಾಡಲಾಗಿದೆ. | ಬಂದಿದೆ |
| ಋ) | ಹಾಗಿದ್ದಲ್ಲಿ, ಸದರಿ ಕಟ್ಟಡವನ್ನು ದುರಸ್ಥಿಪಡಿಸಿ ನವೀಕರಣಗೊಳಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ; ಹಾಗಿದ್ದಲ್ಲಿ, ಇದಕ್ಕಾಗಿ ಸರ್ಕಾರ ಅನುದಾನವನ್ನೇನಾದರೂ ನಿಗಧಿಪಡಿಸಿದೆಯೇ; ನಿಗದಿಪಡಿಸಿದ್ದಲ್ಲಿ, ದುರಸ್ಥಿ ಕಾಮಗಾರಿಯನ್ನು ಯಾವಾಗ ಕೈಗೆತ್ತಿಕೊಳ್ಳಲಾಗುವುದು? (ವಿವರಗಳನ್ನು ನೀಡುವುದು) | ಸದರಿ ಕಟ್ಟಡವು ಮೂಲತಃ ಆರೋಗ್ಯ ಇಲಾಖೆಗೆ ಸೇರಿದ ಸ್ವತ್ತಾಗಿದ್ದು, ಈ ಇಲಾಖೆಗೆ ಹಸ್ತಾಂತರಗೊಂಡಿರುವುದಿಲ್ಲ. ಈ ಕುರಿತು ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕೋಲಾರ ಇವರು ಈ ಸ್ವತ್ತನ್ನು ಹಸ್ತಾಂತರ ಮಾಡಲು ಜಿಲ್ಲಾಧಿಕಾರಿಗಳು, ಕೋಲಾರ ಮತ್ತು ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಕೋಲಾರ ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಪತ್ರ ಬರೆಯಲಾಗಿದ್ದು, ಈ ಸಂಬಂಧ ಕ್ರಮವಹಿಸಲಾಗುತ್ತಿದೆ. ಸದರಿ ಕಟ್ಟಡವು ಹಸ್ತಾಂತರಗೊಂಡ ನಂತರ ಅನುದಾನ ಲಭ್ಯತೆಗೆ ಅನುಸಾರವಾಗಿ ದುರಸ್ತಿ ಕಾಮಗಾರಿ ಬಗ್ಗೆ ಕ್ರಮವಹಿಸಲಾಗುವುದು. | |

ಸಂ: ಮಮಇ 333 ಎಸ್‌ಜೆಡಿ 2020

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ
ಸಬಲೀಕರಣ ಇಲಾಖಾ ಸಚಿವರು.

## ಅನುಬಂಧ - I

ಶ್ರೀ ಗೋವಿಂದ ರಾಜು (ವಿಧಾನ ಸಭೆಯಿಂದ ಚುನಾಯಿತರಾದವರು), ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:419(373)ರ ಕ್ರ.ಸಂ(ಅ) ಮತ್ತು( ಆ) – ಅನುಬಂಧ

| ಕ್ರಸಂ | ಹುದ್ದೆಯ ಪದನಾಮ | ಮಂಜೂರು | ಭರ್ತಿ | ಖಾಲಿ |
|---|---|---|---|---|
| 1 | ಉಪ ನಿರ್ದೇಶಕರು | 1 | 1 | 0 |
| 2 | ನಿರೂಪಣಾಧಿಕಾರಿಗಳು | 1 | 1 | 0 |
| 3 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿಗಳು | 1 | 0 | 1 |
| 4 | ಜಿಲ್ಲಾ ಮಕ್ಕಳ ರಕ್ಷಣಾಧಿಕಾರಿಗಳು | 1 | 0 | 1 |
| 5 | ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು | 6 | 6 | 0 |
| 6 | ಸಹಾಯಕ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು | 7 | 5 | 2 |
| 7 | ಅಧೀಕ್ಷಕರು–ದರ್ಜೆ–1 | 1 | 1 | 0 |
| 8 | ಅಧೀಕ್ಷಕರು–ದರ್ಜೆ–2 | 7 | 4 | 3 |
| 9 | ಹಿರಿಯ ಮೇಲ್ವಿಚಾರಕಿ | 13 | 6 | 7 |
| 10 | ಮೇಲ್ವಿಚಾರಕಿ | 67 | 12 | 55 |
| 11 | ಪ್ರಥಮ ದರ್ಜೆ ಸಹಾಯಕರು | 21 | 7 | 14 |
| 12 | ದ್ವಿತೀಯ ದರ್ಜೆ ಸಹಾಯಕರು | 8 | 6 | 2 |
| 13 | ಹಿರಿಯ ಬೆರಳಚ್ಚುಗಾರರು | 1 | 1 | 0 |
| 14 | ಬೆರಳಚ್ಚುಗಾರರು | 4 | 0 | 4 |
| 15 | ಹಿರಿಯ ವಾಹನ ಚಾಲಕರು | 2 | 1 | 1 |
| 16 | ವಾಹನ ಚಾಲಕರು | 5 | 5 | 0 |
| 17 | ಶಿಕ್ಷಕರು | 4 | 0 | 4 |
| 18 | ಗೃಹಪಾಲಕ/ಗೃಹಪಾಲಕಿ | 5 | 1 | 4 |
| 19 | ಮುಖ್ಯೋಪಾಧ್ಯಾಯರು | 1 | 0 | 1 |
| 20 | ಎ.ಎನ್.ಎಂ | 1 | 0 | 1 |
| 21 | ಮನಶಾಸ್ತ್ರಜ್ಞರು | 2 | 0 | 2 |
| 22 | ಸಂದರ್ಶನ ವೈದ್ಯಾಧಿಕಾರಿಗಳು | 1 | 0 | 1 |
| 23 | ಗ್ರೂಪ್–ಡಿ | 27 | 10 | 17 |
| | **ಒಟ್ಟು ಹುದ್ದೆಗಳು** | **187** | **67** | **120** |

ಅನುಬಂಧ-2

1. ಖಾಲಿ ಇರುವ ಸಹಾಯಕ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ವೃಂದದ ಹುದ್ದೆಗಳಿಗೆ ವರ್ಗಾವಣೆಯ ಮೂಲಕ ಭರ್ತಿಮಾಡಲು ಕ್ರಮವಹಿಸಲಾಗುವುದು.
2. ಖಾಲಿ ಇರುವ ಹಿರಿಯ ಮೇಲ್ವಿಚಾರಕಿಯರ ಹುದ್ದೆಗೆ ಮೇಲ್ವಿಚಾರಕಿಯ ವೃಂದದಿಂದ ಮುಂಬಡ್ತಿ ನೀಡಿ ಭರ್ತಿ ಮಾಡಲು ಕ್ರಮವಹಿಸಲಾಗುವುದು.
3. ಕರ್ನಾಟಕ ಲೋಕಸೇವಾ ಆಯೋಗಕ್ಕೆ ಮೇಲ್ವಿಚಾರಕಿ ವೃಂದದ 70 ಹುದ್ದೆಗಳಿಗೆ ಹೆಚ್ಚುವರಿ ಆಯ್ಕೆಪಟ್ಟಿ ಕೋರಲಾಗಿದ್ದು, ಸದರಿ ಆಯ್ಕೆಪಟ್ಟಿ ಸ್ವೀಕೃತವಾದ ನಂತರ ಖಾಲಿ ಇರುವ ಮೇಲ್ವಿಚಾರಕಿಯರ ವೃಂದದ ಹುದ್ದೆಗಳನ್ನು ಭರ್ತಿಮಾಡಲು ಕ್ರಮವಹಿಸಲಾಗುವುದು.
4. ಇಲಾಖೆಯಲ್ಲಿ ಖಾಲಿ ಇರುವ 50 ಪ್ರಥಮ ದರ್ಜೆ ಸಹಾಯಕರ ವೃಂದದ ಹುದ್ದೆಗಳನ್ನು ಹಾಗೂ ದ್ವಿತೀಯ ದರ್ಜೆ ಸಹಾಯಕರ ವೃಂದದ 60 ಹುದ್ದೆಗಳನ್ನು ಹಾಗೂ ಗೃಹಪಾಲಕ/ಪಾಲಕಿ ವೃಂದದ 45 ಹುದ್ದೆಗಳನ್ನು ಭರ್ತಿ ಮಾಡಲು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಆಯ್ಕೆ ಪಟ್ಟಿ ನೀಡಲು ಕೋರಿ ಪ್ರಸ್ತಾವನೆ ಸಲ್ಲಿಸಲಾಗಿದ್ದು, ಆಯ್ಕೆಪಟ್ಟಿ ಸ್ವೀಕೃತವಾದ ನಂತರ ಸದರಿ ಹುದ್ದೆಗಳನ್ನು ಭರ್ತಿಮಾಡಲು ಕ್ರಮ ವಹಿಸಲಾಗುವುದು.
5. ಖಾಲಿ ಇರುವ ಹಿರಿಯ ವಾಹನ ಚಾಲಕ/ವಾಹನ ಚಾಲಕ/ಗ್ರೂಪ್-ಡಿ ವೃಂದದ ಹುದ್ದೆಗಳಿಗೆ ಹೊರ ಗುತ್ತಿಗೆಯ ಮೇಲೆ ನೇಮಕಾತಿ ಮಾಡಿಕೊಳ್ಳಲಾಗುತ್ತಿದೆ.
6. ಕರ್ನಾಟಕ ಲೋಕಸೇವಾ ಆಯೋಗದಿಂದ 40 ಬೆರಳಚ್ಚುಗಾರರ ಹುದ್ದೆಗೆ ಆಯ್ಕೆಪಟ್ಟಿ ಸ್ವೀಕೃತವಾಗಿದ್ದು, ನೇಮಕಾತಿ ಪ್ರಕ್ರಿಯೆ ಪ್ರಗತಿಯಲ್ಲಿದೆ. ನೇಮಕಾತಿ ಹಂತದಲ್ಲಿ ಖಾಲಿ ಇರುವ ಬೆರಳಚ್ಚುಗಾರರ ಹುದ್ದೆ ಭರ್ತಿಗೆ ಕ್ರಮವಹಿಸಲಾಗುವುದು.
7. ಇತರೆ ಖಾಲಿ ಇರುವ ಎಲ್ಲ ಹುದ್ದೆಗಳನ್ನು ಮುಂದಿನ ಸಾಮಾನ್ಯ ವರ್ಗಾವಣಾ ಅವಧಿಯಲ್ಲಿ ಭರ್ತಿ ಮಾಡಲು ಕ್ರಮವಹಿಸಲಾಗುವುದು.